ಲಿಖಿತ ಮೂಲಕ ಉತ್ತರಿಸುವ



ಕರ್ನಾಟಕ ವಿಧಾನ ಪರಿಷತ್ತು

ನೂರ ನಲವತ್ತನೆಯ ಅಧಿವೇಶನ

ಬುಧವಾರ, ದಿನಾಂಕ : 04 ನೇ ಮಾರ್ಚ್, 2020

ಉಪನೋಂದಣಾಧಿಕಾರಿ ಕಛೇರಿಯ ದತ್ತಾಂಶಗಳನ್ನು ಇಂಟರ್ನೆಟ್ ಹ್ಯಾಕ್ ಮಾಡುತ್ತಿರುವ ಬಗ್ಗೆ

ಶ್ರೀ ಯು.ಬಿ. ವೆಂಕಟೇಶ್ (ನಾಮನಿರ್ದೇಶನ ಹೊಂದಿದವರು) :-

246 (206) ಮಾನ್ಯ ಕಂದಾಯ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ :-

(ಅ) ಬೆಂಗಳೂರು ನಗರದಲ್ಲಿನ ಸ್ವತ್ತುಗಳು ಒಬ್ಬರಿಂದ ಒಬ್ಬರಿಗೆ ಮಾರಾಟವಾದ ಸಂದರ್ಭದಲ್ಲಿ ಉಪನೋಂದಣಾಧಿಕಾರಿ ಕಛೇರಿಯಲ್ಲಿ ನೋಂದಣಿಯಾಗುತ್ತಿದ್ದು, ಹೀಗೆ ನೋಂದಣಿಯಾದ ದತ್ತಾಂಶಗಳು ಇಲಾಖೆಯ ಸರ್ವರ್‍ನಲ್ಲಿ ಸಂಗ್ರಹಿಸಲ್ಪಡುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ;

(ಆ) ಈ ರೀತಿ ಸಂಗ್ರಹಿಸಲಾದ ದತ್ತಾಂಶಗಳನ್ನು ಕೆಲವರು ಇಂಟರ್ ನೆಟ್ ಹ್ಯಾಕ್ ಮಾಡಿ ನಿವೇಶನ ಸಂಖ್ಯೆಗಳನ್ನು ತಿದ್ದಿ, ನಕಲಿ ದಾಖಲೆಗಳನ್ನು ಸೃಷ್ಟಿಸಿ ಬೇರೆಯವರಿಗೆ ಮಾರಾಟ ಮಾಡಿರುವ ಪ್ರಕರಣಗಳು ಬೆಂಗಳೂರು ನಗರದಲ್ಲಿ ಕಂಡುಬಂದಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ ;

(ಇ) ಗಮನಕ್ಕೆ ಬಂದಿದ್ದಲ್ಲಿ, ಸರ್ಕಾರ ಸಂಬಂಧಪಟ್ಟ ವ್ಯಕ್ತಿಗಳ ಮೇಲೆ ದಾಖಲಿಸಿರುವ ಪ್ರಕರಣಗಳೆಷ್ಟು ಹಾಗೂ ಕೈಗೊಂಡಿರುವ ಕ್ರಮಗಳೇನು;

(ಈ) ಇಂತಹ ಪ್ರಕರಣಗಳಿಂದ ಸರ್ಕಾರದ ಬೊಕ್ಕಸಕ್ಕೆ ಆಗಿರುವ ಹಾನಿ ಎಷ್ಟು?